

# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 834 (1106)

ಉತ್ತರಿಸುವ ಸಚಿವರು : ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 13.03.2020

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಒಂದೂವರೆ ವರ್ಷದಿಂದ ಕೈಮಗ್ಗ ನೇಕಾರರಿಗೆ ನೂಲು ಸರಬರಾಜು ವಿಳಂಬ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2018ನೇ ಸಾಲಿನ ಆಗಸ್ಟ್ ಮತ್ತು ಸೆಪ್ಟೆಂಬರ್ ತಿಂಗಳಲ್ಲಿ ಕಚ್ಚಾ ನೂಲು ಖರೀದಿಸಲು ಸೂಕ್ತ ಸಮಯದಲ್ಲಿ ಟೆಂಡರ್ ಪ್ರಕ್ರಿಯೆ ನಡೆಸದಿದ್ದ ಕಾರಣ ಹಾಗೂ ವಿದ್ಯಾ ವಿಕಾಸ ಯೋಜನೆಯಡಿ ನೀಡಬೇಕಾಗಿದ್ದ ಮುಂಗಡ ಹಣ ವಿಳಂಬವಾಗಿದ್ದರಿಂದ ನೂಲು ಸರಬರಾಜಿನಲ್ಲಿ ವ್ಯತ್ಯಾಸವಾಗಿದ್ದು, ಪ್ರಸ್ತುತ ಅವೆಲ್ಲವನ್ನೂ ಸರಿಪಡಿಸಿ ಟೆಂಡರ್ ಪ್ರಕ್ರಿಯೆಯನ್ನು ಸೂಕ್ತವಾಗಿ ನಿರ್ವಹಿಸುತ್ತಿದ್ದು, ಕಳೆದ ಒಂದೂವರೆ ವರ್ಷದಿಂದ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ನೋಂದಾಯಿತ ನೇಕಾರರಿಗೆ ಯಾವುದೇ ವಿಳಂಬ ವಿಲ್ಲದೇ ಪ್ರತಿ ತಿಂಗಳು ಸರಾಸರಿ 45,000 ಕೆ.ಜಿ ಕಚ್ಚಾ ನೂಲನ್ನು ವಿತರಿಸಲಾಗಿದ್ದು, ಇದರಿಂದ ಪ್ರತಿ ತಿಂಗಳು 3.00 ಲಕ್ಷ ಮೀಟರ್ ಗಳಷ್ಟು ಬಟ್ಟೆಯನ್ನು ಉತ್ಪಾದಿಸಲಾಗಿರುತ್ತದೆ. |
| ಆ) | ಕೈಮಗ್ಗ ನೇಕಾರರನ್ನು ಸರ್ಕಾರ ನಿರ್ಲಕ್ಷಿಸಿರುವುದರಿಂದ ಕೈಮಗ್ಗ ಘಟಕಗಳ ಸಂಖ್ಯೆ ಕ್ಷೀಣಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೈಮಗ್ಗ ನೇಕಾರರನ್ನು ನಿರ್ಲಕ್ಷಿಸಿರುವುದಿಲ್ಲ. ಆದರೆ ಕೈಮಗ್ಗ ಘಟಕಗಳ ಸಂಖ್ಯೆ ಕ್ಷೀಣಿಸುತ್ತಿರುವುದಕ್ಕೆ ಈ ಕೆಳಕಂಡ ಕಾರಣಗಳಿರುತ್ತವೆ:-<br>ಕೈಮಗ್ಗ ಉತ್ಪನ್ನಗಳ ದರವು ವಿದ್ಯುತ್ ಮಗ್ಗಗಳ ಉತ್ಪನ್ನಗಳ ದರಕ್ಕಿಂತ ಹೆಚ್ಚಳವಾಗಿರುವುದರಿಂದ ಮಾರುಕಟ್ಟೆಯಲ್ಲಿ ಪೈಪೋಟಿ ನೀಡಲು ಕಷ್ಟ ಸಾಧ್ಯವಾಗುತ್ತಿದೆ.<br>ಯುವ ಪೀಳಿಗೆಯವರು ವಿದ್ಯುತ್ ಮಗ್ಗ ನೇಯ್ಗೆಯ ಕಡೆ ಆಸಕ್ತಿ ವಹಿಸಿರುತ್ತಾರೆ. |
| ಇ) | ಪ್ರಸ್ತುತ ರಾಜ್ಯದಲ್ಲಿರುವ ಕೈಮಗ್ಗಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು) | 2019-20ನೇ ಸಾಲಿನ ಕೇಂದ್ರ ಸರ್ಕಾರದ 4ನೇ ಕೈಮಗ್ಗ ಗಣತಿ ಪ್ರಕಾರ ರಾಜ್ಯದಲ್ಲಿ 29377 ಕೈಮಗ್ಗಗಳು ಇರುತ್ತವೆ.<br>ಜಿಲ್ಲಾವಾರು ಮಾಹಿತಿಯನ್ನು **ಅನುಬಂಧ**ದಲ್ಲಿ ಒದಗಿಸಿದೆ. |
| ಈ) | ನಿರ್ಲಕ್ಷ್ಯಕ್ಕೊಳಗಾದ ಕೈಮಗ್ಗ ನೇಕಾರರನ್ನು ಉತ್ತೇಜಿಸಲು ಸರ್ಕಾರ ಕೈಗೊಂಡಿರುವ ಕ್ರಮವೇನು? | ಕೈಮಗ್ಗ ನೇಕಾರರನ್ನು ಉತ್ತೇಜಿಸಲು ಸರ್ಕಾರವು ಈ ಕೆಳಕಂಡ ಯೋಜನೆಗಳನ್ನು ಜಾರಿಗೆ ತಂದಿರುತ್ತದೆ.<br>• ನೇಕಾರರ ಸಾಲ ಮನ್ನಾ<br>• ಮಿತವ್ಯಯ ನಿಧಿ ಯೋಜನೆ<br>• ಕೈಮಗ್ಗ ಉತ್ಪನ್ನಗಳ ಮಾರಾಟದ ಮೇಲೆ ಗ್ರಾಹಕರಿಗೆ ನೀಡಿದ ಶೇ.20 ರಿಬೇಟ್-ಅನ್ನು ರಾಜ್ಯಸರ್ಕಾರದ ವತಿಯಿಂದ ಮರುಪಾವತಿಸಲಾಗುತ್ತಿದೆ.<br>• ಕೈಮಗ್ಗ ವಿಕಾಸ ಯೋಜನೆ<br>• ಕೈಮಗ್ಗಗಳಿಗೆ ನ್ಯೂಮ್ಯಾಟಿಕ್ / ಮೋಟರೈಸ್ಡ್ ಜಕಾರ್ಡ್ ಸಲಕರಣೆಗಳ ಕಿಟ್ ಒದಗಿಸುವುದು.<br>• ಕೈಮಗ್ಗಗಳ ವಿನ್ಯಾಸಗಳ ಉನ್ನತೀಕರಣಕ್ಕಾಗಿ ಎಲೆಕ್ಟ್ರಾನಿಕ್ ಜಕಾರ್ಡ್ ಒದಗಿಸುವುದು.<br>• ವಸತಿ ಮತ್ತು ಕಾರ್ಯಾಗಾರ ಯೋಜನೆ |

ಸಂ: ವಾಕೈ 74 JAKE 2020

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು

ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಮಾನ್ಯಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 834 (1106) ಗೆ ಅನುಬಂಧ

2019-20 ನೇ ಸಾಲಿನ ಕೇಂದ್ರ ಸರ್ಕಾರದ 4ನೇ ಕೈಮಗ್ಗ ಗಣತಿ ಪ್ರಕಾರ ಜಿಲ್ಲಾವಾರು ಮಾಹಿತಿ

| ಕ್ರ.ಸಂ | ಜಿಲ್ಲೆಗಳ ಹೆಸರು | ಕೈಮಗ್ಗಗಳ ಸಂಖ್ಯೆ |
|---|---|---|
| 1 | ಬಾಗಲಕೋಟೆ | 6319 |
| 2 | ಬೆಂಗಳೂರು ನಗರ | 1184 |
| 3 | ಬೆಂಗಳೂರು ಗ್ರಾಮಾಂತರ | 194 |
| 4 | ಬೆಳಗಾವಿ | 1341 |
| 5 | ಬಳ್ಳಾರಿ | 1239 |
| 6 | ಬೀದರ್ | 3032 |
| 7 | ವಿಜಯಪುರ | 732 |
| 8 | ಚಾಮರಾಜನಗರ | 883 |
| 9 | ಚಿಕ್ಕಬಳ್ಳಾಪುರ | 929 |
| 10 | ಚಿಕ್ಕಮಗಳೂರು | 202 |
| 11 | ಚಿತ್ರದುರ್ಗ | 3132 |
| 12 | ದಕ್ಷಿಣ ಕನ್ನಡ | 34 |
| 13 | ಧಾವಣಗೆರೆ | 130 |
| 14 | ಧಾರವಾಡ | 368 |
| 15 | ಗದಗ | 1431 |
| 16 | ಕಲಬುರಗಿ | 358 |
| 17 | ಹಾಸನ | 397 |
| 18 | ಹಾವೇರಿ | 1850 |
| 19 | ಕೊಡಗು | 60 |
| 20 | ಕೋಲಾರ | 170 |
| 21 | ಕೊಪ್ಪಳ | 879 |
| 22 | ಮಂಡ್ಯ | 111 |
| 23 | ಮೈಸೂರು | 10 |
| 24 | ರಾಯಚೂರು | 15 |
| 25 | ರಾಮನಗರ | 65 |
| 26 | ಶಿವಮೊಗ್ಗ | 14 |
| 27 | ತುಮಕೂರು | 3730 |
| 28 | ಉಡುಪಿ | 37 |
| 29 | ಉತ್ತರ ಕನ್ನಡ | 23 |
| 30 | ಯಾದಗಿರಿ | 508 |
| | **ಒಟ್ಟು** | **29377** |

ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ
ನಿರ್ದೇಶಕರು, ಕೈಮಗ್ಗ ಮತ್ತು ಜವಳಿ